# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 10
ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ್ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 13.12.2021
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಸರ್ಕಾರಿ ಪದವಿ ಪೂರ್ವ ಕಾಲೇಜುಗಳ ಮೂಲಭೂತ ಸೌಲಭ್ಯಗಳಿಲ್ಲದೆ ಸಿಬ್ಬಂದಿಗಳಿಲ್ಲದೆ ಹತ್ತು ಹಲವು ಸಮಸ್ಯೆಗಳಿಂದ ಬಳಲುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಹಾಗಿದ್ದಲ್ಲಿ, ಸರ್ಕಾರಿ ಪದವಿ ಪೂರ್ವ ಕಾಲೇಜುಗಳಿಗೆ ಅಗತ್ಯ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ಪದವಿ ಪೂರ್ವ ಶಿಕ್ಷಣ ಹಂತದಲ್ಲಿ ವಿದ್ಯಾರ್ಥಿಗಳಿಗೆ ಉತ್ತಮ ಶೈಕ್ಷಣಿಕ ವಾತಾವರಣ ಕಲ್ಪಿಸಲು, ನಬಾರ್ಡ್ ಸಹಯೋಗದ ಆರ್‌ಐಡಿಎಫ್ ಯೋಜನೆಗಳು (RIDF, ರಾಜ್ಯ ಬಂಡವಾಳ ವೆಚ್ಚ ಯೋಜನೆ (State Fund), ಎಸ್‌ಸಿಪಿ/ಟಿಎಸ್‌ಪಿ ಯೋಜನೆ(SCP/TSP), ವಿಶೇಷ ಅಭಿವೃದ್ಧಿ ಯೋಜನೆ (SDP), ವಿಶೇಷ ಪ್ಯಾಕೇಜ್ ಇತ್ಯಾದಿ ವಿವಿಧ ಯೋಜನೆಗಳಡಿ **ರಾಜ್ಯದ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಿಗೆ** ಮೂಲಭೂತ ಸೌಲಭ್ಯಗಳಾದ ಕಟ್ಟಡ ನಿರ್ಮಾಣ/ಹೆಚ್ಚುವರಿ ತರಗತಿ ಕೊಠಡಿ/ ಪ್ರಯೋಗಾಲಯ ಕೊಠಡಿ/ ಎನ್.ಎಸ್.ಎಸ್./ಕ್ರೀಡಾ ಕೊಠಡಿ/ ಶೌಚಾಲಯ ನಿರ್ಮಾಣ/ ಕಟ್ಟಡ ನವೀಕರಣ/ ಕೊಠಡಿಗಳ ದುರಸ್ಥಿ ಇತ್ಯಾದಿಗಳನ್ನು ಇಲಾಖೆಗೆ ಒದಗಿಸಲಾದ ಅನುದಾನದ ಲಭ್ಯತೆಯ ಅನುಸಾರ ಹಾಗೂ ವಿದ್ಯಾರ್ಥಿಗಳ ಸಂಖ್ಯೆಗೆ ಅನುಗುಣವಾಗಿ ಒದಗಿಸಲು ಕ್ರಮಕೈಗೊಳ್ಳಲಾಗುತ್ತಿದೆ.<br><br>ಶೈಕ್ಷಣಿಕ ಚಟುವಟಿಕೆಗೆ ಪೂರಕವಾಗಿ ಪೀಠೋಪಕರಣ/ಡೆಸ್ಕ್ ಮತ್ತು ವಿಜ್ಞಾನ ವಿಭಾಗದ |

| | | |
|---|---|---|
| | | ಪ್ರಯೋಗಾಲಯ ಕೊಠಡಿಗಳಿಗೆ ಪ್ರಯೋಗಾಲಯ ಉಪಕರಣಗಳನ್ನು ಸಹ ಒದಗಿಸಲಾಗುತ್ತಿದೆ.<br><br>ಮೇಲ್ಕಂಡ ಯೋಜನೆಗಳಡಿ ಕಳೆದ 5 ವರ್ಷಗಳಲ್ಲಿ ಬಿಡುಗಡೆಯಾದ ಅನುದಾನದ ವಿವರವನ್ನು **ಅನುಬಂಧ** ದಲ್ಲಿ ಒದಗಿಸಿದೆ. |
| ಇ) | ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ಪಟ್ಟಣದ ಸರ್ಕಾರಿ ಪದವಿ ಪೂರ್ವ ಕಾಲೆಜಿಗೆ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಲು ಸರ್ಕಾರ ಏನೇನು ಕ್ರಮಗಳನ್ನು ಕೈಗೊಂಡಿದೆ; (ಪ್ರಗತಿಯ ವಿವರ ಒದಗಿಸುವುದು) | ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ಪಟ್ಟಣದ ಸರ್ಕಾರಿ ಪದವಿ ಪೂರ್ವ ಕಾಲೇಜಿಗೆ ಆರ್‌ಐಡಿಎಫ್ -19 ರ ಯೋಜನೆಯಡಿ ರೂ 83.20 ಲಕ್ಷ ಮೊತ್ತಕ್ಕೆ 04 ತರಗತಿ ಕೊಠಡಿಗಳು,08 ಶೌಚಾಲಯ ಕಾಮಗಾರಿ ಪೂರ್ಣಗೊಂಡು ಹಸ್ತಾಂತರಗೊಂಡಿದೆ.<br><br>ವಿಶೇಷ ಪ್ಯಾಕೇಜ್ ಯೋಜನೆಯಡಿ 06 ತರಗತಿ ಕೊಠಡಿಗಳು, 02 ಶೌಚಾಲಯ ಬ್ಲಾಕ್‌ಗಳ ನಿರ್ಮಾಣಕ್ಕಾಗಿ ರೂ 100.00 ಲಕ್ಷ ಮೊತ್ತವು ಅನುಮೋದನೆಗೊಂಡಿದ್ದು, ಕಾಮಗಾರಿ ಪೂರ್ಣಗೊಂಡು ಹಸ್ತಾಂತರಗೊಂಡಿದೆ.<br><br>ಪ್ರಸ್ತುತ ಸದರಿ ಕಾಲೇಜಿಗೆ 13 ತರಗತಿ ಕೊಠಡಿಗಳು ಹಾಗೂ 10 ಶೌಚಾಲಯಗಳಿದ್ದು, ಯಾವುದೇ ಮೂಲಭೂತ ಸೌಲಭ್ಯಗಳ ಕೊರತೆ ಇರುವುದಿಲ್ಲ. |
| ಈ) | ಸದರಿ ಜಿಲ್ಲೆಯ ವ್ಯಾಪ್ತಿಯಲ್ಲಿರುವ ಒಟ್ಟು ಪದವಿ ಪೂರ್ವ ಕಾಲೇಜುಗಳ ಸಂಖ್ಯೆ ಎಷ್ಟು; ಮಂಜೂರಾದ ವಿವಿಧ ವೃಂದದ ಒಟ್ಟು ಹುದ್ದೆಗಳ ಸಂಖ್ಯೆ ಎಷ್ಟು; ಭರ್ತಿ ಮಾಡಿರುವ ಹುದ್ದೆಗಳ ಸಂಖ್ಯೆ ಎಷ್ಟು; | ಒಟ್ಟು ಸರ್ಕಾರಿ ಪದವಿ ಪೂರ್ವ ಕಾಲೇಜುಗಳ ಸಂಖ್ಯೆ: 31<br><br>**ಹುದ್ದೆಗಳ ವಿವರ** |

| ಹುದ್ದೆ | ಮಂಜೂರಾದ ಹುದ್ದೆಗಳು | ಭರ್ತಿ ಮಾಡಿರುವ ಹುದ್ದೆಗಳು |
|---|---|---|
| ಪ್ರಾಚಾರ್ಯರು | 30 | 17 |
| ಉಪನ್ಯಾಸಕರು | 307 | 173 |
| ಗ್ರಂಥಪಾಲಕರು | 01 | 01 |
| ಪ್ರ.ದ.ಸ | 07 | 4 |
| ದ್ವಿ.ದ.ಸ | 13 | 9 |
| ಗ್ರೂಪ್ .ಡಿ | 15 | 4 |

| | | |
|---|---|---|
| ಉ) | ಈ ಜಿಲ್ಲೆಯ ಎಷ್ಟು ಪದವಿ ಪೂರ್ವ ಕಾಲೇಜುಗಳು ಮೂಲಭೂತ ಸೌಲಭ್ಯಗಳಿಂದ ವಂಚಿತವಾಗಿವೆ; | ಚಿಕ್ಕೋಡಿ ಶೈಕ್ಷಣಿಕ ಜಿಲ್ಲೆ ವ್ಯಾಪ್ತಿಯಲ್ಲಿ ಒಟ್ಟು 31 ಸರ್ಕಾರಿ ಪದವಿ ಪೂರ್ವ ಕಾಲೇಜುಗಳು ಕಾರ್ಯ ನಿರ್ವಹಿಸುತ್ತಿದ್ದು, 2020-21 ನೇ ಸಾಲಿನಲ್ಲಿ ಹೊಸದಾಗಿ ಪ್ರಾರಂಭವಾದ ಕೊಟ್ಟಲಗಿ ಸರ್ಕಾರಿ ಪದವಿ ಪೂರ್ವ ಕಾಲೇಜನ್ನು ಹೊರತುಪಡಿಸಿ ಉಳಿದ ಎಲ್ಲಾ ಸರ್ಕಾರಿ ಪದವಿ ಪೂರ್ವ ಕಾಲೇಜುಗಳು ಅಗತ್ಯ ಮೂಲಭೂತ ಸೌಲಭ್ಯಗಳನ್ನು ಒದಗಿಸಲಾಗಿದೆ. ಹೊಸದಾಗಿ ಪ್ರಾರಂಭವಾದ ಕೊಟ್ಟಲಗಿ ಸರ್ಕಾರಿ ಪದವಿ ಪೂರ್ವ ಕಾಲೇಜು ಪ್ರೌಢಶಾಲಾ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿದೆ. |
| ಊ) | ಇವುಗಳಿಗೆ ಮೂಲಭೂತ ಸೌಲಭ್ಯ ಒದಗಿಸುವ ಮತ್ತು ಬಾಕಿ ಇರುವ ಹುದ್ದೆಗಳನ್ನು ಯಾವ ಕಾಲಮಿತಿಯಲ್ಲಿ ಭರ್ತಿ ಮಾಡಲಾಗುವುದು? (ವಿವರ ಒದಗಿಸುವುದು) | ಆಯವ್ಯಯದಲ್ಲಿ ಒದಗಿಸಲಾದ ಅನುದಾನದ ಲಭ್ಯತೆ ಹಾಗೂ ಅಗತ್ಯತೆಗೆ ಅನುಗುಣವಾಗಿ ಆದ್ಯತೆ ಮೇರೆಗೆ ಹಂತ ಹಂತವಾಗಿ ಹೊಸ ಕಾಲೇಜು ಕಟ್ಟಡ ನಿರ್ಮಾಣ ಮಾಡಲು ಅಗತ್ಯ ಕ್ರಮವಹಿಸಲಾಗುತ್ತಿದೆ.<br><br>ಬಾಕಿ ಇರುವ ಖಾಲಿ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಲಾಗುತ್ತಿದ್ದು, ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮವಹಿಸಲಾಗುತ್ತಿದೆ. |

**ಇಪಿ: 273 ಯೋಸಕ 2021**

(ಬಿ.ಸಿ. ನಾಗೇಶ್)

**ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು**

## ಕಳೆದ 05 ವರ್ಷಗಳಿಂದ ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ಅನುಷ್ಟಾನವಾಗುತ್ತಿರುವ ಕಾಮಗಾರಿಗಳ ವಿವರ

| ಕ್ರ.ಸಂ | ಯೋಜನೆ | ಕಾಮಗಾರಿ ಸಂಖ್ಯೆ | ಕಾಮಗಾರಿ | | | ಅನುಷ್ಠಾನ ಸಂಸ್ಥೆ | ಅನುಮೋದಿತ ಮೊತ್ತ (ರೂ ಲಕ್ಷಗಳಲ್ಲಿ) | ಕಾಮಗಾರಿ ಅನುಮೋದನೆಗೊಂಡ ವರ್ಷ |
|---|---|---|---|---|---|---|---|---|
| | | | ತರಗತಿ ಕೊಠಡಿ | ಶೌಚಾಲಯ | ಲ್ಯಾಬ್ | | | |
| 1 | ಆರ್‌ಐಡಿಎಫ್-22 | 142 | 84 | 268 | 22 | PRED | 7508.20 | 2016-17 |
| 2 | ರಾಜ್ಯ ಬಂಡವಾಳ ವೆಚ್ಚ | 14 | 56 | 28 | 0 | PRED | 1202.00 | |
| 3 | ಮೀಸಲು ಕ್ಷೇತ್ರ | 33 | 99 | 24 | 10 | PRED | 1979.10 | |
| | **ಒಟ್ಟು** | **189** | **239** | **320** | **32** | | **10689.30** | |
| 4 | ಆರ್‌ಐಡಿಎಫ್-23 | 52 | 190 | 60 | 60 | PRED | 4518.00 | 2017-18 |
| 5 | ರಾಜ್ಯ ಬಂಡವಾಳ ವೆಚ್ಚ | 62 | 160 | 124 | 38 | PRED | 4460.80 | |
| 6 | ಮೀಸಲು ಕ್ಷೇತ್ರ | 58 | 150 | 120 | 48 | PRED | 4475.00 | |
| 7 | ವಿಶೇಷ ಅಭಿವೃದ್ಧಿ ಯೋಜನೆ | 6 | 24 | 12 | 8 | PRED | 600.00 | |
| | **ಒಟ್ಟು** | **178** | **524** | **316** | **154** | | **14053.80** | |
| 8 | ಕಟ್ಟಡ ನವೀಕರಣ / ಅಭಿವೃದ್ಧಿ (ದುರಸ್ಥಿ) | 224 | ಕಟ್ಟಡ ನವೀಕರಣ / ಅಭಿವೃದ್ಧಿ (ದುರಸ್ಥಿ) | | | PRED | **1800.00** | |
| 9 | ಆರ್‌ಐಡಿಎಫ್-24 | 148 | 682 | 262 | 78 | PWD | 14380.00 | 2018-19 |
| 10 | ವಿಶೇಷ ಪ್ಯಾಕೇಜ್ | 91 | 435 | 184 | 80 | PWD | 15000.00 | |
| 11 | ರಾಜ್ಯ ಬಂಡವಾಳ ವೆಚ್ಚ | 52 | 255 | 102 | 16 | PRED | 4690.00 | |
| 12 | ವಿಶೇಷ ಅಭಿವೃದ್ಧಿ ಯೋಜನೆ | 8 | 42 | 16 | 10 | PWD | 763.00 | |
| | **ಒಟ್ಟು** | **299** | **1414** | **564** | **184** | | **34833.00** | |
| 13 | ರಾಜ್ಯ ಬಂಡವಾಳ ವೆಚ್ಚ | 34 | 112 | 64 | 10 | PWD/PRED/NK | 2500.00 | 2019-20 |
| 14 | ವಿಶೇಷ ಅಭಿವೃದ್ಧಿ ಯೋಜನೆ | 20 | 101 | 40 | 12 | PWD/PRED/NK | 2000.00 | |
| 15 | ವಿಶೇಷ ಅಭಿವೃದ್ಧಿ ಯೋಜನೆ | 4 | 24 | 8 | 0 | PWD/PRED/NK | 543.00 | |

| ಕ್ರ.ಸಂ | ಯೋಜನೆ | ಕಾಮಗಾರಿ ಸಂಖ್ಯೆ | ಕಾಮಗಾರಿ | | | ಅನುಷ್ಠಾನ ಸಂಸ್ಥೆ | ಅನುಮೋದಿತ ಮೊತ್ತ (ರೂ ಲಕ್ಷಗಳಲ್ಲಿ) | ಕಾಮಗಾರಿ ಅನುಮೋದನೆಗೊಂಡ ವರ್ಷ |
|---|---|---|---|---|---|---|---|---|
| | | | ತರಗತಿ ಕೊಠಡಿ | ಶೌಚಾಲಯ | ಲ್ಯಾಬ್ | | | |
| 16 | ವಿಶೇಷ ಅಭಿವೃದ್ಧಿ ಯೋಜನೆ | 279 ಸ.ಪ.ಪೂ ಕಾಲೇಜುಗಳಿಗೆ ಪ್ರಯೋಗಾಲಯ ಉಪಕರಣಗಳಿಗಾಗಿ ತಲಾ ರೂ 40000/-ದಂತೆ ರೂ 111.60 ಲಕ್ಷ ಮೊತ್ತ ಹಾಗೂ 546 ಸ.ಪ.ಪೂ ಕಾಲೇಜುಗಳಿಗೆ ಪೀಠೋಪಕರಣಗಳಿಗಾಗಿ ತಲಾ ರೂ 90000/-ದಂತೆ 491.40 ಲಕ್ಷ ಮೊತ್ತವನ್ನು ಬಿಡುಗಡೆ ಮಾಡಲಾಗಿದೆ. | | | | | 603.00 | 2019-20 |
| | | 58 | 237 | 112 | 22 | | 5646.00 | |
| 17 | ಮೀಸಲು ಕ್ಷೇತ್ರ | 3 | ತರಗತಿ ಕೊಠಡಿ/ಪ್ರಯೋಗಾಲಯ ಕೊಠಡಿ ನವೀಕರಣ/ದುರಸ್ಥಿ | | | PRED | 7.60 | |
| 18 | ರಾಜ್ಯ ಬಂಡವಾಳ ವೆಚ್ಚ | 19 | 59 | 38 | 7 | PWD | 2100.00 | 2020-21 |
| 19 | ಶೌಚಾಲಯ ನಿರ್ವಹಣೆ ಮತ್ತು ದುರಸ್ತಿ | ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಶೌಚಾಲಯ ದುರಸ್ಥಿ/ನಿರ್ಮಾಣ ಹಾಗೂ ನೀರಿನ ಸಂಪರ್ಕ ಒದಗಿಸಲು | | | | | 1500.00 | 2021-22 |
| ಒಟ್ಟಾರೆ ಮೊತ್ತ | | 743 | 2473 | 1350 | 399 | | 70629.70 | |